# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1391

ಸದಸ್ಯರ ಹೆಸರು : ಶ್ರೀ ಎಸ್.ಎಲ್.ಭೋಜೇಗೌಡ (ಶಿಕ್ಷಕರ ಕ್ಷೇತ್ರ)

ಉತ್ತರಿಸಬೇಕಾದ ಸಚಿವರು : ಸಾರಿಗೆ ಹಾಗೂ ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

ಉತ್ತರಿಸಬೇಕಾದ ದಿನಾಂಕ : 24-12-2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ನೋಂಣಿಯಾಗುವ ವಿವಿಧ ವಾಹನಗಳಿಗೆ ವಾಹನಗಳ ಮಾಲೀಕರು ನಿರ್ಧಿಷ್ಟ ಸಂಖ್ಯೆ (ಫ್ಯಾನ್ಸಿ ನಂಬರ್) ಪಡೆಯಲು ಅವಕಾಶವಿದೆಯೇ? ಹಾಗಿದ್ದಲ್ಲಿ ನಿಯಮಾವಳಿಯ ಮಾಹಿತಿ ನೀಡುವುದು) | ಕರ್ನಾಟಕ ಮೋಟಾರು ವಾಹನಗಳ ನಿಯಮಗಳು 1989ರ ನಿಯಮ 46-ಎ ರಡಿ, ರಾಜ್ಯದಲ್ಲಿ ನೋಂದಣಿಯಾಗುವ ವಿವಿಧ ವಾಹನಗಳಿಗೆ ವಾಹನಗಳ ಮಾಲೀಕರು ನಿರ್ಧಿಷ್ಟ ಸಂಖ್ಯೆ (ಫ್ಯಾನ್ಸಿ ನಂಬರ್) ಪಡೆಯಲು ಅವಕಾಶವಿದೆ.<br><br>ನಿಯಮಗಳ ಮಾಹಿತಿಯನ್ನು ಕೆಳಕಂಡಂತೆ ಒದಗಿಸಲಾಗಿದೆ:-<br><br>ಆಯಾ ಪ್ರಾದೇಶಿಕ ಸಾರಿಗೆ ಕಛೇರಿಗಳಲ್ಲಿ ಚಾಲ್ತಿಯಲ್ಲಿರುವ ನೋಂದಣಿ ಸಂಖ್ಯೆಯಿಂದ ಮುಂದಿನ ಒಂದು ಸಾವಿರ ಸಂಖ್ಯೆಗಳ ಚಾಲ್ತಿ ಶ್ರೇಣಿಯಲ್ಲಿ ಯಾವುದಾದರೂ ಒಂದು ಸಂಖ್ಯೆಯನ್ನು ಕಾಯ್ದಿರಿಸಲು ವಾಹನ ಮಾಲೀಕರು ಇಚ್ಛಿಸಿದಲ್ಲಿ ಒಂದು ದ್ವಿಚಕ್ರ ವಾಹನಕ್ಕೆ ರೂ.6,000/-, ಲಘು ಮೋಟಾರು ವಾಹನಕ್ಕೆ (ಸಾರಿಗೇತರ) ರೂ.20,000/- ಇತರೆ ಸಾರಿಗೆ ವರ್ಗದ ವಾಹನಗಳಿಗೆ ರೂ.30,000/-ಗಳ ಶುಲ್ಕವನ್ನು ನಿಗದಿಪಡಿಸಲಾಗಿದೆ. ಚಾಲ್ತಿ ಶ್ರೇಣಿಯಲ್ಲಿ ಒಂದು ಸಾವಿರದ ನಂತರದ ನೋಂದಣಿ ಸಂಖ್ಯೆಯನ್ನು ಸಾರಿಗೆ ಆಯುಕ್ತರು ನಿಯಮ-46ರ ಉಪ ನಿಯಮ (1) ರಲ್ಲಿ ನಿರ್ದಿಷ್ಟಗೊಳಿಸಿದ ಶುಲ್ಕ ಪಾವತಿಸಿಕೊಂಡು ಹಂಚಿಕೆ ಮಾಡಲು ಅವಕಾಶವಿದೆ. ಒಂದೇ ನೋಂದಣಿ ಸಂಖ್ಯೆಯನ್ನು ಎರಡು ಅಥವಾ ಅದಕ್ಕಿಂತ ಹೆಚ್ಚಿನ ಅರ್ಜಿದಾರರು ಪಡೆಯಲು ಅರ್ಜಿ ಸಲ್ಲಿಸಿದ ಸಮಯದಲ್ಲಿ ಅಂತಹ ನೋಂದಣಿ ಸಂಖ್ಯೆಗಳನ್ನು ಬಿಡ್ ಮೂಲಕ ಹರಾಜು ಮಾಡಿ ಹೆಚ್ಚಿನ ಮೊತ್ತ ಪಾವತಿಸುವ ಅರ್ಜಿದಾರರಿಗೆ ನೀಡಲಾಗುವುದು. |

| | | |
|---|---|---|
| | | ಇದೇ ನಿಯಮದ 5-ಎ ರಲ್ಲಿ ಚಾಲ್ತಿಯಲ್ಲಿರುವ ಶ್ರೇಣಿಯಿಂದ ನಂತರದ ಶ್ರೇಣಿಯಲ್ಲಿ ಕಾಯ್ದಿರಿಸಿದ ಸಂಖ್ಯೆಗಳನ್ನು ದ್ವಿಚಕ್ರ ವಾಹನಗಳಿಗೆ ರೂ.25,000/- ಹಾಗೂ ಇತರೆ ವಾಹನಗಳಿಗೆ ರೂ.75,000/- ಶುಲ್ಕದೊಂದಿಗೆ ಹಂಚಿಕೆ ಮಾಡಲು ಅವಕಾಶವಿದೆ. ಈ ನಿಯಮದಡಿ ಮುಂಗಡ ಶ್ರೇಣಿಯಲ್ಲಿರುವ ಕೆಲವೊಂದು ಆಕರ್ಷಕ ನೋಂದಣಿ ಸಂಖ್ಯೆಗಳನ್ನು ಬಹಿರಂಗ ಹರಾಜಿನ ಮೂಲಕ ಹಂಚಿಕೆ ಮಾಡಲು ಅವಕಾಶವಿದೆ. ಮೇಲೆ ತಿಳಿಸಿದ ನಿಗದಿತ ಶುಲ್ಕ ಹೊರತುಪಡಿಸಿ, ಹೆಚ್ಚಿನ ಮೊತ್ತ ಬಿಡ್ ಮಾಡುವ ಅರ್ಜಿದಾರರು / ವಾಹನ ಮಾಲೀಕರಿಗೆ ಅಂತಹ ನೋಂದಣಿ ಸಂಖ್ಯೆಯನ್ನು ಹಂಚಿಕೆ ಮಾಡಲು ಕ್ರಮ ವಹಿಸಲಾಗುತ್ತದೆ. ಇದರಿಂದ ರಾಜ್ಯ ಸರ್ಕಾರದ ಬೊಕ್ಕಸಕ್ಕೆ ಹೆಚ್ಚಿನ ಮೊತ್ತದ ರಾಜಸ್ವ ಸಂಗ್ರಹಣೆ ಮಾಡಲಾಗುತ್ತಿದೆ. |
| ಆ. | ಫ್ಯಾನ್ಸಿ ನೋಂದಣಿ ಸಂಖ್ಯೆಗಳನ್ನು ಇಲಾಖೆಯು ಹರಾಜು ಮಾಡುತ್ತಿರುವುದು ನಿಜವೇ? ಕಳೆದ ಮೂರು ವರ್ಷಗಳ ಅವಧಿಯಲ್ಲಿ ಈ ಫ್ಯಾನ್ಸಿ ಸಂಖ್ಯೆಗಳ ಹರಾಜಿನಿಂದ ಸಂಗ್ರಹವಾಗಿರುವ ಹಣವೆಷ್ಟು (ಚಿಕ್ಕಮಗಳೂರು ಜಿಲ್ಲೆಯ ಮಾಹಿತಿ ನೀಡುವುದು) | ಸಾರಿಗೆ ಇಲಾಖೆಯಲ್ಲಿ ಫ್ಯಾನ್ಸಿ ನೋಂದಣಿ ಸಂಖ್ಯೆಗಳನ್ನು ಹರಾಜು ಮಾಡಲಾಗುತ್ತಿದೆ.<br><br>Fancy Numbers ಮಾರಾಟದ ಮೂಲಕ ಚಿಕ್ಕಮಗಳೂರು ಪ್ರಾದೇಶಿಕ ಸಾರಿಗೆ ಕಛೇರಿಯಲ್ಲಿ ಕಳೆದ ಮೂರು ವರ್ಷಗಳಲ್ಲಿ ಬಂದಿರುವ ಆದಾಯದ ವಿವರಗಳು ಕೆಳಕಂಡಂತಿವೆ :- |

| ಕ್ರ.ಸಂ. | ವರ್ಷ | ಆದಾಯ (ರೂ.ಗಳಲ್ಲಿ) |
|---|---|---|
| 1 | 2018-19 | 566000 |
| 2 | 2019-20 | 1012000 |
| 3 | 2020-21 | 983000 |
| | ಒಟ್ಟು | 2561000 |

ಮಾಸಿಕ ಮತ್ತು ವಾರ್ಷಿಕವಾರು ಸಂಪೂರ್ಣ ಮಾಹಿತಿಯನ್ನು ಅನುಕ್ರಮವಾಗಿ ಅನುಬಂಧದಲ್ಲಿ ಒದಗಿಸಲಾಗಿದೆ.

| | | |
|---|---|---|
| ಇ. | ಫ್ಯಾನ್ಸಿ ನೋಂದಣಿ ಸಂಖ್ಯೆಗಳನ್ನು ಪಡೆಯಲು ವಾಹನದ ಮಾಲೀಕರು ಮತ್ತು ಅಧಿಕಾರಿಗಳು ಶಾಮೀಲಾಗಿ ಸರ್ಕಾರಕ್ಕೆ ನಷ್ಟ ಉಂಟು ಮಾಡುತ್ತಿರುವುದು ನಿಜವೇ? ಹಾಗಿದ್ದಲ್ಲಿ ಈ ನಿಟ್ಟಿನಲ್ಲಿ ಇದುವರೆಗೆ ಸರ್ಕಾರ ಕೈಗೊಂಡ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಫ್ಯಾನ್ಸಿ ನೋಂದಣಿ ಸಂಖ್ಯೆಗಳನ್ನು ಪಡೆಯುವಲ್ಲಿ ವಾಹನದ ಮಾಲೀಕರು ಮತ್ತು ಅಧಿಕಾರಿಗಳು ಸರ್ಕಾರಕ್ಕೆ ಯಾವುದೇ ರಾಜಸ್ವ ನಷ್ಟ ಮಾಡಿರುವುದಿಲ್ಲ ಮತ್ತು ಸಾರಿಗೆ ಆಯುಕ್ತರ ಕಛೇರಿಯಲ್ಲಿ ಆಕರ್ಷಕ ನೋಂದಣಿ ಸಂಖ್ಯೆಗಳನ್ನು ಪಾರದರ್ಶಕವಾಗಿ ಬಹಿರಂಗ ಹರಾಜು ಮೂಲಕ ಹಂಚಿಕೆ ಮಾಡಲಾಗುತ್ತಿದೆ.<br><br>ಕರ್ನಾಟಕ ಮೋಟಾರು ವಾಹನಗಳ ನಿಯಮಗಳು 1989ರ ನಿಯಮ 46-ಎ ರಡಿ, ರಾಜ್ಯದಲ್ಲಿ ಹೊಸ ವಾಹನಗಳಿಗೆ ವಾಹನ ಮಾಲೀಕರ ಇಚ್ಛೆಗೆ ಅನುಸಾರವಾಗಿ ನಿರ್ಧಿಷ್ಟ ಸಂಖ್ಯೆ (ಫ್ಯಾನ್ಸಿ ನಂಬರ್) ನೀಡಲು ನಿಯಮಾನುಸಾರ ಕ್ರಮ ವಹಿಸಲಾಗುತ್ತಿದೆ. |

ಟಿಡಿ 127 ಟಿಡಿಕ್ಯೂ 2021

(ಬಿ. ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ
ಪಂಗಡಗಳ ಕಲ್ಯಾಣ ಸಚಿವರು.